CPMG / KA / BG-GPO/13/2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೨, ೨೦೦೫ (ಭಾದ್ರಪದ ೩೧ ಶಕ ವರ್ಷ ೧೯೨೭) | ಸಂಚಿಕೆ ೩೮ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

### ಜಿಲ್ಲಾ ಪೊಲೀಸ್ ಕಛೇರಿ, ತುಮಕೂರು

**ಅಧಿಸೂಚನೆ ಸಂಖ್ಯೆ: ಲೆಕ್ಕ(2)ಎಂಟಿ:114:2005-2006 ದಿನಾಂಕ: 20ನೇ ಆಗಸ್ಟ್ 2005**

**ವಿಷಯ :** ಈ ಘಟಕದ ನಿರುಪಯುಕ್ತಗೊಳಿಸಿದ ವಾಹನಗಳನ್ನು ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ :** 1. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ:6:ಟಿಸಿಇ:87: ದಿನಾಂಕ: 15.12.92.

2. ಪ್ರಧಾನ ಕಛೇರಿ ಹಿಂಬರಹ ಸಂಖ್ಯೆ: ವಾಸಾ(1)58/2002-2003 ದಿನಾಂಕ: 09.06.05.

ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಉಲ್ಲೇಖ(2)ರ ಆದೇಶದಲ್ಲಿ ನಿರುಪಯುಕ್ತಗೊಳಿಸಲಾಗಿರುವ ತುಮಕೂರು ಜಿಲ್ಲಾ ಪೊಲೀಸ್ ಇಲಾಖೆಯ ಈ ಕೆಳಕಂಡ ವಾಹನಗಳನ್ನು ದಿನಾಂಕ: 18.10.2005 ರಂದು ಬೆಳಿಗ್ಗೆ 11.00 ಗಂಟೆಗೆ ತುಮಕೂರಿನ ಬಟವಾಡಿಯಲ್ಲಿರುವ ಸಶಸ್ತ್ರ ಮೀಸಲು ಪಡೆ ಕಛೇರಿ ಆವರಣದಲ್ಲಿ ಬಹಿರಂಗ ಹರಾಜು ಮಾಡಲು ನಿಗದಿಪಡಿಸಲಾಗಿದೆ. ಆದ್ದರಿಂದ ಇಚ್ಛೆಯುಳ್ಳವರು ಸದರಿ ಹರಾಜಿನಲ್ಲಿ ಭಾಗವಹಿಸಿ ವಾಹನವನ್ನು ಖರೀದಿಸಬಹುದಾಗಿದೆ.

**ಹರಾಜು ವಾಹನದ ವಿವರಗಳು**

| ಕ್ರಮ ಸಂಖ್ಯೆ | ವಾಹನ ನೋಂದಣಿ ಸಂಖ್ಯೆ | ಮಾದರಿ | ತಯಾರಿಕಾ ವರ್ಷ |
|---|---|---|---|
| 1 | ಸಿಎಜಿ-9129 | ಬುಲೆಟ್ ಮೋಟಾರ್ ಸೈಕಲ್ | 1982 |
| 2 | ಸಿಎಜಿ-9172 | ಬುಲೆಟ್ ಮೋಟಾರ್ ಸೈಕಲ್ | 1984 |

ಈ ಮೇಲ್ಕಂಡ ವಾಹನಗಳನ್ನು ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸುವ ಬಿಡ್‌ದಾರರು ಈ ಕೆಳಗೆ ಸೂಚಿಸಿರುವ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟಿರಬೇಕಾಗಿರುತ್ತದೆ.

**ಟೆಂಡರ್/ ಬಹಿರಂಗ ಹರಾಜಿನ ಷರತ್ತು ಮತ್ತು ನಿಬಂಧನೆಗಳು:**

1. ಮೊಹರು ಮಾಡಿದ ಟೆಂಡರ್ ಲಕೋಟೆಯನ್ನು (ಸೀಲ್ಡ್ ಕವರ್) ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ, ತುಮಕೂರು ಇವರ ವಿಳಾಸಕ್ಕೆ ಕಳುಹಿಸಬೇಕು. ಲಕೋಟೆಯ ಮೇಲೆ ನಿರುಪಯುಕ್ತ ಪೊಲೀಸ್ ವಾಹನದ ಖರೀದಿ ಬಗ್ಗೆ ಎಂದು ಬಿಡಿ ಅಕ್ಷರಗಳಲ್ಲಿ ನಮೂದಿಸಬೇಕು.
2. ಪ್ರತಿಯೊಬ್ಬ ಟೆಂಡರ್‌ದಾರರು/ ಬಿಡ್‌ದಾರರು ಪ್ರತಿ ವಾಹನದ ಹರಾಜಿನಲ್ಲಿ ಭಾಗವಹಿಸಲು ಭದ್ರತಾ ಠೇವಣಿ ರೂ.2000-00 ಗಳನ್ನು ಡಿ.ಡಿ. ಅಥವಾ ನಗದು ರೂಪದಲ್ಲಿ ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು ಇವರ ಹೆಸರಿನಲ್ಲಿ ಪಾವತಿ ಮಾಡಿ ಅರ್ಜಿಯನ್ನು ಸಲ್ಲಿಸಬೇಕು. ಚೆಕ್ಕುಗಳನ್ನು ಸ್ವೀಕರಿಸುವುದಿಲ್ಲ. ಠೇವಣಿ ಹಣಕ್ಕೆ ಬಡ್ಡಿ ಕೊಡಲಾಗುವುದಿಲ್ಲ. ಠೇವಣಿ ಸಲ್ಲಿಸದೆ ಕಳುಹಿಸಲಾದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
3. ಟೆಂಡರ್ ಫಾರಂನಲ್ಲಿ ವೆಚ್ಚವನ್ನು ಅಂಕಿ ಮತ್ತು ಅಕ್ಷರಗಳಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಏನಾದರೂ ತಿದ್ದುಪಡಿ ಮಾಡಿದ್ದಲ್ಲಿ ಟೆಂಡರ್‌ದಾರರು ಪೂರ್ಣ ಸಹಿಯೊಂದಿಗೆ ದೃಢೀಕರಿಸಿರಬೇಕು.
4. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
5. ಟೆಂಡರ್‌ಗಳನ್ನು ದಿನಾಂಕ: 15.10.2005 ರಂದು ಸಂಜೆ 5.00 ಗಂಟೆಯ ಒಳಗೆ ಈ ಕಛೇರಿಗೆ ತಲುಪುವಂತೆ ಕಳುಹಿಸಬೇಕು. ತಡವಾಗಿ ಬಂದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
6. ಟೆಂಡರ್‌ದಾರರು ಸಹ ಹೆಚ್ಚಿನ ಭದ್ರತಾ ಠೇವಣಿ ಹಣವಿಲ್ಲದೆ ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದು.

7. ಜಿಲ್ಲಾ ಪೊಲೀಸ್ ಅಧೀಕ್ಷಕರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜನ್ನು ನಡೆಸುವರು. ಠೇವಣಿ ತುಂಬಿದ ಟೆಂಡರ್/ ಸವಾಲುದಾರರು ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.
8. ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬೆಲೆಯನ್ನು ದಾಖಲು ಮಾಡಿದ ನಂತರ ಸ್ವೀಕೃತವಾದ ಟೆಂಡರ್ ಲಕೋಟೆಯನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರಾಗಲೀ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳಾಗಲೀ ಸಾರ್ವಜನಿಕರ ಸಮಕ್ಷಮದಲ್ಲಿ ತೆರೆದು ಬಹಿರಂಗಪಡಿಸುವರು. ಈ ಎರಡರಲ್ಲಿ ಯಾರು ಹೆಚ್ಚಿನ ಬೆಲೆಯನ್ನು ನೀಡಿರುತ್ತಾರೋ ಅವರನ್ನು ಯಶಸ್ವಿ ಖರೀದಿದಾರರೆಂದು ಪರಿಗಣಿಸಲಾಗುವುದು.
9. ಯಶಸ್ವಿಯಾದ ಟೆಂಡರ್/ ಸವಾಲುದಾರರು ವಾಹನದ ಒಟ್ಟು ಬೆಲೆಯ ಶೇಕಡಾ 25 ರಷ್ಟು ಹಣವನ್ನು ಸ್ಥಳದಲ್ಲಿಯೇ ಕಟ್ಟಬೇಕು. ಉಳಿದ ಹಣವನ್ನು ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರು ಅನುಮೋದಿಸಿದ ನಂತರ ಪಾವತಿ ಮಾಡಿ ಒಂದು ತಿಂಗಳೊಳಗಾಗಿ ತಮ್ಮ ಸ್ವಂತ ಖರ್ಚಿನಲ್ಲಿ ವಾಹನವನ್ನು ತೆಗೆದುಕೊಂಡು ಹೋಗಬೇಕು. ತಪ್ಪಿದರೆ ಮುಂಗಡವಾಗಿ ಕಟ್ಟಿದ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
10. ಪೂರ್ಣ ಮೊತ್ತವನ್ನು ತುಮಕೂರು ಜಿಲ್ಲಾ ಪೊಲೀಸ್ ಕಛೇರಿಯಲ್ಲಿ ನಗದಾಗಿ ಪಾವತಿ ಮಾಡಬೇಕು. ಚೆಕ್ಕುಗಳನ್ನು ಸ್ವೀಕರಿಸಲಾಗುವುದಿಲ್ಲ.
11. ಹರಾಜಿನಲ್ಲಿ ಭಾಗವಹಿಸಿದ ಟೆಂಡರ್/ ಸವಾಲುದಾರರು ಹರಾಜು ಮುಗಿದ ನಂತರ ಹರಾಜಿನಲ್ಲಿ ಯಶಸ್ವಿಯಾದವರು ಮತ್ತು ಯಶಸ್ವಿಯಾಗದವರು ಸರ್ಕಾರಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
12. ಹರಾಜು ಮಾಡಲಾದ ವಾಹನದ ಮೌಲ್ಯಕ್ಕೆ ನಿಯಮಾನುಸಾರ ವಾಹನವನ್ನು ತೆಗೆದುಕೊಂಡು ಹೋಗುವ ಸಂದರ್ಭದಲ್ಲಿ ಚಾಲ್ತಿಯಲ್ಲಿರುವ ದರದ ಪ್ರಕಾರ ತೆರಿಗೆ ಮತ್ತು ಸೆಸ್‌ಗಳನ್ನು ಸಹ ಪಾವತಿ ಮಾಡಬೇಕು.
13. ಟೆಂಡರ್ ಹರಾಜಿನಲ್ಲಿ ಭಾಗವಹಿಸಿ ಯಶಸ್ವಿಯಾದ ಬಿಡ್‌ದಾರರ ತಪ್ಪು ಗ್ರಹಿಕೆಯಿಂದ ವಿವಾದ ಉಂಟಾಗಿ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದಲ್ಲಿ, ಅಂತಹ ಟೆಂಡರ್/ ಸವಾಲುದಾರರು ಮುಂಗಡವಾಗಿ ಕಟ್ಟಿಡಲಾದ (ಇ.ಎಂ.ಡಿ) ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಮತ್ತು ಅಂತಹವರ ವಿರುದ್ಧ ಕಾನೂನುಬದ್ಧವಾಗಿ ಕ್ರಮ ಕೈಗೊಳ್ಳಲಾಗುವುದು.
14. ಹರಾಜಿನ ಯಾವುದೇ ಟೆಂಡರ್/ ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದುಪಡಿಸುವ/ ತಿರಸ್ಕರಿಸುವ ಅಧಿಕಾರವನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು ಇವರು ಹೊಂದಿರುತ್ತಾರೆ. ಇವರ ತೀರ್ಮಾನವೇ ಅಂತಿಮವಾದುದು.
15. ಮೇಲ್ಕಂಡ ಟೆಂಡರ್/ಹರಾಜಿನ ಸಂಬಂಧದಲ್ಲಿ ಯಾವುದೇ ವಾದ ವಿವಾದಗಳು ಉದ್ಭವಿಸಿದಲ್ಲಿ, ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ಇವರು ನೀಡುವ ತೀರ್ಮಾನವೇ ಅಂತಿಮವಾಗಿರುತ್ತದೆ.
16. ಹರಾಜು ಮಾಡಲಿರುವ ನಿರುಪಯುಕ್ತ ವಾಹನಗಳನ್ನು ತುಮಕೂರಿನ ಬಟವಾಡಿಯಲ್ಲಿರುವ ಸಶಸ್ತ್ರ ಮೀಸಲು ಪಡೆ ಕಛೇರಿ ಆವರಣದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ. ಇಚ್ಛೆಯುಳ್ಳವರು ಕಛೇರಿ ವೇಳೆಯಲ್ಲಿ ಡಿವೈ.ಎಸ್.ಪಿ., ಡಿ.ಎ.ಆರ್., ತುಮಕೂರು ರವರನ್ನು ಸಂಪರ್ಕಿಸಿ ಪರಿಶೀಲನೆ ಮಾಡಿ ಹರಾಜಿನಲ್ಲಿ ಭಾಗವಹಿಸಿ ವಾಹನವನ್ನು ಕೊಳ್ಳಬಹುದು.

**ಟೆಂಡರ್ ಫಾರಂನ ನಮೂನೆ**

**ನಿರುಪಯುಕ್ತ ವಾಹನಗಳಿಗೆ ಟೆಂಡರ್**

ಗೆ,
ಪೊಲೀಸ್ ಅಧೀಕ್ಷಕರು,
ತುಮಕೂರು ಜಿಲ್ಲೆ, ತುಮಕೂರು.

ಮಾನ್ಯರೇ,

ತಮ್ಮ ಕಛೇರಿಯ ಅಧಿಸೂಚನೆ ಸಂಖ್ಯೆ: ಲೆಕ್ಕ(2) ಎಂಟಿ/114/05-06 ದಿನಾಂಕ: 20.8.2005 ರಲ್ಲಿ ತಿಳಿಸಿದ ನಿರುಪಯುಕ್ತ ವಾಹನಗಳನ್ನು ರೂ. (ರೂಪಾಯಿ...........) ಗಳಿಗೆ ಖರೀದಿಸಲು ಒಪ್ಪಿರುತ್ತೇನೆ.

ಸ್ಥಳ
ದಿನಾಂಕ

ತಮ್ಮ ವಿಶ್ವಾಸಿ,
(ಬಿಡ್‌ದಾರರ ಪೂರ್ಣ ಸಹಿ ಮತ್ತು ವಿಳಾಸ)

ಪಿ.ಆರ್.513

ಪೊಲೀಸ್ ಅಧೀಕ್ಷಕರು,
ತುಮಕೂರು ಜಿಲ್ಲೆ.

## ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಕಾರ್ಯಯೋಜನೆ ಮತ್ತು ಮೋಜಣಿ, ಶಿವಮೊಗ್ಗ

## ಸಂಕ್ಷಿಪ್ತ ಟೆಂಡರ್ ಪ್ರಕಟಣೆ

**ಸಂಖ್ಯೆ: ಎ2:ಬಿಯುಡಿ:ಕಲ್ಲುಕಂಬ:ಟೆಂಡರ್:ಸಿಆರ್:12:2005-2006 ದಿನಾಂಕ: 8ನೇ ಸೆಪ್ಟೆಂಬರ್ 2005**

**ವಿಷಯ :** 2005-06ನೇ ಸಾಲಿಗೆ ಸಾಗರ ವಿಭಾಗದಲ್ಲಿ ಮೋಜಣಿ ಮಾಡಿದ ಪ್ರದೇಶಗಳ ಸೀಮಾರೇಖೆ ಉದ್ದಕ್ಕೂ ನೆಡಲು ಬೇಕಾದ ಕಲ್ಲು ಕಂಬ ಚಪ್ಪಡಿಗಳನ್ನು ಸರಬರಾಜು ಮಾಡಿ ನೆಡಲು ಹಾಗೂ (ಕೈರಾನ್ಸ್) ಕಲ್ಲು ಗುಪ್ಪೆಗಳನ್ನು ನಿರ್ಮಿಸಲು ಟೆಂಡರ್ ಕುರಿತು.

ಸಾಗರ ವಿಭಾಗದಲ್ಲಿ ಎಸ್.ಎಫ್ ಮತ್ತು ಎಂ.ಎಫ್. ಪ್ರದೇಶಗಳ ಸೀಮಾರೇಖೆಗಳಲ್ಲಿ ಉತ್ತಮ ಗುಣಮಟ್ಟದ ಸುಟ್ಟ (ಸಿಂಗಲ್ ಲೈನ್ ಡ್ರೆಸ್ಡ್ ಗ್ರಾನೈಟ್ ಕಲ್ಲು) ಚೆನ್ನಾಗಿ ಕೆತ್ತಿದ 145 ಸೆಂ.ಮೀ. ಎತ್ತರ, 20 ಸೆಂ.ಮೀ ಅಗಲ ಹಾಗೂ 15 ಸೆಂ.ಮೀ ದಪ್ಪ ಹಾಗೂ ಅರ್ಧಚಂದ್ರ ವರ್ತುಲಾಕಾರದ ಕಲ್ಲು ಕಂಬಗಳನ್ನು ಸರಬರಾಜು ಹಾಗೂ 60 ಸೆಂ.ಮೀ, 20 ಸೆಂ.ಮೀ, 25 ಸೆಂ.ಮೀ, ಅಳತೆಯ ಗುಂಡಿಗಳನ್ನು ತೋಡಿ, ಸದರಿ ಕಲ್ಲು ಕಂಬಗಳನ್ನು ನೆಡಲು ಈ ಕೆಳಗಿನ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರಮಾಣವನ್ನು ಸರಬರಾಜು ಮಾಡಿ ನೆಡಲು ಹಾಗೂ ಸೀಮಾ ರೇಖೆಗಳಲ್ಲಿ ಸೂಚಿಸಿದ ಜಾಗಗಳಲ್ಲಿ ಕೆಳಕಂಡ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಅಳತೆಯ ಕೈರಾನುಗಳನ್ನು (ಕಲ್ಲು ಗುಪ್ಪೆಗಳನ್ನು) ನಿರ್ಮಿಸಲು ಟೆಂಡರ್ ಎಂದು ಬರೆಯಲಾದ ಹಾಗೂ ಮೊಹರಾದ ಮತ್ತು ಸಹಿ ಮಾಡಲಾದ ಟೆಂಡರ್‌ಗಳನ್ನು ನೊಂದಾಯಿಸಲ್ಪಟ್ಟ ಗುತ್ತಿಗೆದಾರರಿಂದ ಆಹ್ವಾನಿಸಿದೆ. ಈ ಮೇಲ್ಕಂಡ ಷರತ್ತುಗಳನ್ನು ಪೂರೈಸಿದ್ದಲ್ಲಿ ಟೆಂಡರ್‌ಗಳನ್ನು ದಿನಾಂಕ: 10.10.2005ರ ಅಪರಾಹ್ನ 4 ಗಂಟೆಗೆ ಅರಣ್ಯ ಸಂರಕ್ಷಣಾಧಿಕಾರಿಗಳು, ಕಾರ್ಯಯೋಜನೆ ಮತ್ತು ಮೋಜಣಿ, ಶಿವಮೊಗ್ಗ ಅಥವಾ ಅವರಿಂದ ಅಧಿಕಾರಯುತವಾಗಿ ನಿಯೋಜಿಸಲ್ಪಟ್ಟ ಅಧಿಕಾರಿಯವರಿಂದ ಈ ಕಛೇರಿಯಲ್ಲಿ ಸ್ವೀಕರಿಸಲಾಗುವುದು.

ಷೆಡ್ಯೂಲ್

| ಯೂನಿಟ್ ಸಂಖ್ಯೆ | ಕಾಮಗಾರಿಗಳ ವಿವರ | ಆರ್.ಎಫ್ ಕಲ್ಲು ಕಂಬಗಳ ಸಂಖ್ಯೆ (ಅಂದಾಜು) | ಕಲ್ಲುಗುಪ್ಪೆಗಳ ಸಂಖ್ಯೆ (ಅಂದಾಜು) | ಅಂದಾಜು ಮೊತ್ತ ರೂ.ಗಳಲ್ಲಿ | ಇ.ಎಂ.ಡಿ. ರೂ.ಗಳಲ್ಲಿ |
|---|---|---|---|---|---|
| 1 | 2 | 3 | 4 | 5 | 6 |
| 1. | ಸಾಗರ ವಿಭಾಗದ ಮೋಜಣಿ ಮಾಡಿದ ಸೀಮಾರೇಖೆ ಪ್ರದೇಶಗಳಿಗೆ 145 ಸೆಂ.ಮೀ. ಎತ್ತರ, 20 ಸೆಂ.ಮೀ. ಅಗಲ ಹಾಗೂ 15 ಸೆಂ.ಮೀ ದಪ್ಪ ಹಾಗೂ ತುದಿಯಲ್ಲಿ ವರ್ತುಲಾಕಾರದ ಉತ್ತಮ ಗುಣಮಟ್ಟದ ಸುಟ್ಟ ಸಿಂಗಲ್ ಲೈನ್ ಡ್ರೆಸ್ ಮಾಡಿದ ಕಲ್ಲು ಕಂಬಗಳನ್ನು, ಸ್ಟೋನ್ ಕ್ವಾರಿಗಳಿಂದ ತಯಾರಿಸಿ ಕೊಡುವ ಬಗ್ಗೆ. | 1716 ಕಲ್ಲು ಕಂಬಗಳು (834+882) | - | 389532/- | 19500/- |
| 2. | ಸಾಗರ ವಿಭಾಗದ ಮೋಜಣಿ ಮಾಡಿದ ಸೀಮಾರೇಖೆ ಉದ್ದಕ್ಕೂ ಕಲ್ಲು ಕಂಬಗಳನ್ನು ತಯಾರು ಮಾಡಿದ ಸ್ಥಳದಿಂದ ಡಿ-ಲೈನಿನ ನೆಡಬೇಕಾದ ಸ್ಥಳಕ್ಕೆ ಸಾಗಾಣಿಕೆ ಮಾಡಿ 60 ಸೆಂ.ಮೀ. 20 ಸೆಂ.ಮೀ. ಮತ್ತು 25 ಸೆಂ.ಮೀ. ಅಳತೆಯ ಗುಂಡಿಗಳನ್ನು ತೋಡಿ ಕಲ್ಲು ಕಂಬಗಳ ಮೇಲೆ 5 ಮಿ.ಮೀ ಆಳವಾಗಿ ನಿಗದಿಪಡಿಸಿದ ಅಕ್ಷರಗಳನ್ನು (ಆರ್.ಎಫ್) ಬಾಣದ ಗುರುತು ಮತ್ತು ಅನುಕ್ರಮ ಸಂಖ್ಯೆಯನ್ನು ಕೊರೆದು ಹಸಿರು ಬಣ್ಣದಿಂದ ಅಕ್ಷರಗಳನ್ನು ಪೆಯಿಂಟ್ ಮಾಡಿ ನೆಟ್ಟು ಕೊಡುವುದರ ಬಗ್ಗೆ (ಬಾಣದ ಗುರುತು ಮುಂದಿನ ಸ್ಟೇಷನನ್ನು ತೋರಿಸುವಂತೆ ಇರಬೇಕು). | 1716 ಕಲ್ಲು ಕಂಬಗಳು (834+882) | - | 214500/- | 10800/- |
| 3. | ಸಾಗರ ವಿಭಾಗದ ಮೋಜಣಿ ಮಾಡಿದ ಸೀಮಾರೇಖೆ ಉದ್ದಕ್ಕೂ ಅಗತ್ಯವಿರುವ ಕಡೆ ಮತ್ತು ವಲಯ ಅರಣ್ಯಾಧಿಕಾರಿಗಳು ಸೂಚಿಸಿದ ಜಾಗದಲ್ಲಿ 2 ಮೀಟರ್ ಉದ್ದದ 60 ಸೆಂ.ಮೀ. ಸುತ್ತಳತೆಯ ಬಾಳಿಕೆ ಬರುವಂತಹ ಮರದ ದಿಮ್ಮಿಯನ್ನು ನೆಲದಲ್ಲಿ 30 ಸೆಂ.ಮೀ. ಆಳ ಹುಗಿದು ಗಟ್ಟಿ ಮುಟ್ಟಾದ ಕಾಡು ಕಲ್ಲುಗಳನ್ನು ಆಯ್ದು ಈ ಕಂಬದ ಸುತ್ತಲೂ ಅಂದರೆ ಕಂಬದಿಂದ 1 ಮೀಟರ್ ಅಗಲಕ್ಕೆ ಸುತ್ತಲೂ ಕಾಡುಕಲ್ಲುಗಳನ್ನು ಕಟ್ಟುತ್ತಾ ಭೂಮಿಯಿಂದ 1.40 ಮೀಟರ್ ಎತ್ತರದವರೆಗೆ ಕಲ್ಲುಗಳನ್ನು ಮುಂಡ ವೃತ್ತಾಕಾರಕ್ಕೆ ಬರುವ ಹಾಗೆ ಕಟ್ಟಬೇಕು ಇದು ಮಧ್ಯದಿಂದ 30 ಸೆಂ.ಮೀ. ಅಗಲ ಇರಬೇಕು (60 ಸೆಂ.ಮೀ.ಡಯ) ಈ ಕಲ್ಲುಗುಪ್ಪೆಯ ಮೇಲೆ 30 ಸೆಂ.ಮೀ. ಉದ್ದದ ಮರದ ದಿಮ್ಮಿ ಕಾಣುತ್ತಿರಬೇಕು. ಈ ದಿಮ್ಮಿಯ ಮೇಲೆ ಆರ್.ಎಫ್ ಎಂಬ ಅಕ್ಷರಗಳು ಅನುಕ್ರಮ ಸಂಖ್ಯೆಗಳನ್ನು ಮತ್ತು ಬಾಣದ ಗುರುತನ್ನು 1 ಸೆಂ.ಮೀ. ಆಳಕ್ಕೆ ಕೆತ್ತಿ, ಹಸಿರು ಬಣ್ಣದಿಂದ ಪೇಯಿಂಟ್ ಮಾಡಬೇಕು. ಈ ಬಾಣದ ಗುರುತು ಮುಂದಿನ ಸ್ಟೇಷನನ್ನು ತೋರಿಸುವಂತೆ ಇರಬೇಕು. | | 572 ಕೈರಾನ್‌ಗಳು (278+294) | 145860/- | 7300/- |

ಷರತ್ತುಗಳು:

1. ಕಲ್ಲು ಕಂಬಗಳ ಸರಬರಾಜು ಮತ್ತು ನೆಡುವ ಹಾಗೂ ಕಲ್ಲುಗುಪ್ಪೆಗಳ ಪ್ರಮಾಣ ಅಂದಾಜಿನದ್ದಾಗಿರುತ್ತದೆ. ಟೆಂಡರ್‌ಗಳನ್ನು ಯೂನಿಟ್‌ವಾರು ಪ್ರತ್ಯೇಕವಾಗಿ ಮೊಹರು ಮಾಡಲಾದ ಲಕೋಟೆಯಲ್ಲಿ ಮಾತ್ರ ಸಲ್ಲಿಸಬೇಕು. ಪ್ರತಿ ಯೂನಿಟ್‌ಗಳಿಗೆ ಪ್ರತ್ಯೇಕವಾಗಿ ಟೆಂಡರ್ ದರವನ್ನು ಸೂಚಿಸತಕ್ಕದ್ದು. ಪ್ರತಿ ಟೆಂಡರ್‌ದಾರರು ಎಲ್ಲಾ ಯೂನಿಟ್‌ಗಳಿಗೆ ಕೂಡ ದರವನ್ನು ನಮೂದಿಸುವುದು. ಯಾವುದಾದರು ಯೂನಿಟ್ಟನ್ನು ಕೈಬಿಟ್ಟಿದ್ದಲ್ಲಿ ಆ ಟೆಂಡರನ್ನು ತಿರಸ್ಕರಿಸಲಾಗುವುದು.
2. ಮೇಲ್ಕಂಡ ಯೂನಿಟ್‌ಗಳಿಗೆ ಪ್ರತ್ಯೇಕವಾಗಿ ಇ.ಎಂ.ಡಿ. ಹಣ ಡಿ.ಡಿ ಮೂಲಕ ರಾಷ್ಟ್ರೀಕೃತ ಬ್ಯಾಂಕುಗಳಿಂದ ಅರಣ್ಯ ಸಂರಕ್ಷಣಾಧಿಕಾರಿಗಳು, ಕಾರ್ಯಯೋಜನೆ ಮತ್ತು ಮೋಜಣಿ, ಶಿವಮೊಗ್ಗ ಇವರ ಪರವಾಗಿ ಪಡೆದು ಟೆಂಡರುಗಳೊಂದಿಗೆ ಸಲ್ಲಿಸಬೇಕು.

3. ಕಲ್ಲು ಕಂಬಗಳನ್ನು ಸಂಬಂಧಪಟ್ಟ ವಲಯ ಅರಣ್ಯಾಧಿಕಾರಿಗಳು ಗೊತ್ತುಪಡಿಸಿದ ಸ್ಥಳಗಳಿಗೆ ಸರಬರಾಜುಮಾಡಿ ತೃಪ್ತಿಕರವಾಗಿ ನೆಟ್ಟ ನಂತರ ಹಾಗೂ ವಲಯ ಅರಣ್ಯಾಧಿಕಾರಿಗಳು ಸೂಚಿಸಿದ ಸ್ಥಳಗಳಲ್ಲಿ ಕಲ್ಲುಗುಪ್ಪೆಗಳನ್ನು ತೃಪ್ತಿಕರವಾಗಿ ಕಟ್ಟಿದ ನಂತರ ಮತ್ತು ಅನುದಾನ ಹಣ ಲಭ್ಯದ ಮೇರೆಗೆ ಹಾಗೂ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯವರ ತಪಾಸಣೆ ನಂತರ ಹಣ ಪಾವತಿಸಲಾಗುವುದು.
4. ಟೆಂಡರ್ ನಮೂನೆಗಳನ್ನು ದಿನಾಂಕ: 10.10.2005 ರಂದು ಮಧ್ಯಾಹ್ನ 1.30 ರವರೆಗೆ ಕಛೇರಿ ಕೆಲಸದ ವೇಳೆಯಲ್ಲಿ ನಿಗದಿತ ನಮೂನೆ ಬೆಲೆ ರೂ.10.00 ಮತ್ತಿತರ ತೆರಿಗೆಗಳೊಂದಿಗೆ ಪಾವತಿ ಮಾಡಿ ಕೆಳಸಹಿದಾರರಿಂದ ಪಡೆಯಬಹುದು.
5. ಟೆಂಡರ್ ಮಂಜೂರಾತಿ ತಿಳಿಸಿದ 7 ದಿನಗಳಲ್ಲಿ ನಿಗದಿಪಡಿಸಿರುವ ಭದ್ರತಾ ಠೇವಣಿ ಹಣ ಜಮಾದೊಂದಿಗೆ ಕರಾರುನಾಮೆ ಮಾಡಿಕೊಳ್ಳಬೇಕು.
6. ಅರಣ್ಯ ಗುತ್ತಿಗೆದಾರರಾಗಿ ನೊಂದಾಯಿಸಿಕೊಳ್ಳಲು ಇಚ್ಛಿಸುವವರು ದಿನಾಂಕ: 10.10.2005ರ ಮಧ್ಯಾಹ್ನ 12 ಗಂಟೆಯವರೆಗೆ ನಿಗದಿ ಮಾಡಿದ ಶುಲ್ಕ ಪಾವತಿಸಿ ನಿಗದಿತ ನಮೂನೆಗಳಲ್ಲಿ ಅರ್ಜಿಸಲ್ಲಿಸಿ ನೊಂದಾಯಿಸಿಕೊಳ್ಳಬೇಕು.
7. ಟೆಂಡರ್‌ನ್ನು ಸ್ವೀಕರಿಸಿದ ದಿನಾಂಕದಂದು 4 ಗಂಟೆಯ ನಂತರ ಟೆಂಡರ್‌ದಾರರ ಸಮ್ಮುಖದಲ್ಲಿ ಅಥವಾ ಮರುದಿನ ಹಾಜರಿದ್ದ ಗುತ್ತಿಗೆದಾರರ ಸಮಕ್ಷಮ ತೆರೆಯಲಾಗುವುದು. (ಕಛೇರಿ ವೇಳೆಯಲ್ಲಿ)
8. ಗುತ್ತಿಗೆ ಅವಧಿ ದಿನಾಂಕ: 31.3.2006 ರವರೆಗೆ ಇರುತ್ತದೆ.
9. ಇನ್ನಿತರ ವಿವರಗಳನ್ನು ಕಛೇರಿ ಕೆಲಸದ ದಿನಗಳಂದು ಪಡೆಯಬಹುದು.

ಅರಣ್ಯ ಸಂರಕ್ಷಣಾಧಿಕಾರಿ,
ಕಾರ್ಯಯೋಜನೆ ಮತ್ತು ಮೋಜಣಿ, ಶಿವಮೊಗ್ಗ.

ಪಿ.ಆರ್.511

## ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಾರ್ಯಾಲಯ, ಬೀದರ ವಿಭಾಗ, ಬೀದರ

## ವಾಹನಗಳ ಹರಾಜು ಪ್ರಕಟಣೆ

**ಸಂಖ್ಯೆ: ಆರ್‌ಕೆ:ವಾಹನ:ಮಾರಾಟ:ಸಿಆರ್:6:2004-05 ದಿನಾಂಕ: 3ನೇ ಸೆಪ್ಟೆಂಬರ್ 2005**

ಈ ಮೂಲಕ ಸಾರ್ವಜನಿಕರ ಅವಗಾಹನೆಗೆ ತರಬಯಸುವುದೇನೆಂದರೆ, ಬೀದರ ಅರಣ್ಯ ವಿಭಾಗದಲ್ಲಿ ಅರಣ್ಯ ಅಪರಾಧ ಪ್ರಕರಣಗಳಲ್ಲಿ ವಶಪಡಿಸಿಕೊಂಡ ವಾಹನಗಳ (ಕ್ರಮ ಸಂಖ್ಯೆ: 1 ರಿಂದ 10 ವರೆಗೆ) ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೀದರ ವಿಭಾಗ, ಬೀದರ ಅಥವಾ ಅವರಿಂದ ಅಧಿಕಾರ ಪಡೆದಿರುವ ಅಧಿಕಾರಿಗಳು ಸದರಿ ವಾಹನಗಳು ಅನುಸೂಚಿಯಲ್ಲಿ ತೋರಿಸಿದ ಸ್ಥಳದಲ್ಲಿ ಎಲ್ಲಿವೆಯೋ ಹೇಗಿವೆಯೋ ಅಂಥಹ ಸ್ಥಿತಿಯಲ್ಲಿಯೇ ದಿನಾಂಕ: 29.09.2005 ರಂದು ಮಧ್ಯಾಹ್ನ 3.00 ಗಂಟೆಗೆ ಟೆಂಡರ್-ಕಂ-ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಇಷ್ಟವುಳ್ಳವರು ನಿಗದಿಪಡಿಸಿದ ಠೇವಣಿ ಹಣವನ್ನು ಮುಂಗಡವಾಗಿಟ್ಟು ಇಲಾಖೆಯು ವಿಧಿಸುವ ಷರತ್ತುಗಳಿಗೆ ಅನುಗುಣವಾಗಿ ಹರಾಜಿನಲ್ಲಿ ಭಾಗವಹಿಸಬಹುದಾಗಿದೆ.

ಸದರಿ ವಾಹನಗಳ ವಿಲೇವಾರಿಯನ್ನು ಟೆಂಡರ್-ಕಂ-ಹರಾಜಿನ ಮೂಲಕ ಜರುಗಿಸಲಾಗುವುದು ಟೆಂಡರನ್ನು ಕೊಟ್ಟಂತವರು ಹಾಗೂ ಕೊಡದವರು ಸಹ ಹರಾಜಿನಲ್ಲಿ ಭಾಗವಹಿಸಬೇಕಾಗಿದೆ.

**ಟೆಂಡರ್-ಕಂ-ಹರಾಜು-ವಿವರ**

| | | |
|---|---|---|
| 1. | ಟೆಂಡರ್ ಫಾರಂ ಬೆಲೆ | ರೂ.100.00 ಮತ್ತು ತೆರಿಗೆ ಪ್ರತ್ಯೇಕ |
| 2. | ಟೆಂಡರ್ ಫಾರಂ ಕೊಡುವ ದಿನಾಂಕ ಮತ್ತು ವೇಳೆ | ದಿನಾಂಕ: 29.09.2005 ರಂದು ಮಧ್ಯಾಹ್ನ 12.00 ಗಂಟೆಯವರೆಗೆ |
| 3. | ಟೆಂಡರ್ ಫಾರಂ ಸ್ವೀಕರಿಸುವ ದಿನಾಂಕ | ದಿನಾಂಕ: 29.09.2005 (ಮಧ್ಯಾಹ್ನ 1.00 ಗಂಟೆವರೆಗೆ) |
| 4. | ಹರಾಜು ಮಾಡುವ ವೇಳೆ ಮತ್ತು ದಿನಾಂಕ | ದಿನಾಂಕ: 29.09.2005 (ಮಧ್ಯಾಹ್ನ 3.00 ಗಂಟೆ ಅಥವಾ ಮೇಲ್ಪಟ್ಟು) |
| 5. | ಮಾರಾಟ ಮಾಡುವ ಸ್ಥಳ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಾರ್ಯಾಲಯ, ಪ್ರಾದೇಶಿಕ ಅರಣ್ಯ ವಿಭಾಗ, ಬೀದರ. |

1. ಎರಡಾವರ್ತಿಯಾದ ಯಶಸ್ವಿಯಾದ ವಾಹನಗಳ ಟೆಂಡರ್-ಕಂ-ಹರಾಜಿನ ಬಾಬ್ತು ಟೆಂಡರುದಾರರು ಅಥವಾ ಬಿಡ್‌ದಾರರು ಶೇ.50 ಮೊಬಲಗನ್ನು ಹಾಗೂ ಪೂರ್ತಿ ಮೊಬಲಗಿನ ಮೇಲೆ ತೆರಿಗೆಗಳನ್ನು ಹರಾಜಿನ ದಿನವೇ ಪಾವತಿಸತಕ್ಕದ್ದು. ಬಾಕಿ ಉಳಿದ ಶೇ.50ರ ಮೊಬಲಗನ್ನು ಮಂಜೂರಿ ಆದೇಶ ಪಡೆದ ಟೆಂಡರ್‌ದಾರರು/ಬಿಡ್‌ದಾರರು ಆದೇಶ ತಲುಪಿದ 15 ದಿವಸಗಳೊಳಗಾಗಿ ಪಾವತಿಸತಕ್ಕದ್ದು.
2. ಒಂದು ವೇಳೆ ಯಶಸ್ವಿ ಟೆಂಡರ್‌ದಾರರು/ ಬಿಡ್‌ದಾರರು ಟೆಂಡರ್-ಕಂ-ಹರಾಜಿನಲ್ಲಿ ಪಡೆದ ವಾಹನವನ್ನು ಈ ಕಛೇರಿಯು ಆದೇಶಿಸಿದಲ್ಲಿ ತಿಳಿಸಿದ ಪ್ರಕಾರ 15 ದಿನಗಳ ಅವಧಿಯೊಳಗೆ ತೆಗೆದುಕೊಂಡು ಹೋಗದಿದ್ದರೆ ಅವರು ತುಂಬಿದ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಮತ್ತು ಅವರ ಸ್ವಂತ ಜವಾಬ್ದಾರಿಯ ಮೇಲೆ ಮರು ಹರಾಜು ಮಾಡಲಾಗುವುದು ಮರು ಹರಾಜಿನಿಂದ ಸರ್ಕಾರಕ್ಕೆ ಹಾನಿ ಆದಲ್ಲಿ ಅಂಥಹ ನಷ್ಟವನ್ನು ಮೂಲ ಖರೀದಿದಾರರಿಂದ ಭೂ ಕಂದಾಯ ಬಾಕಿ ಅಥವಾ ನ್ಯಾಯಾಲಯದಲ್ಲಿ ದಾವೆಯನ್ನು ಹೂಡುವದರ ಮೂಲಕ ವಸೂಲು ಮಾಡಲಾಗುವುದು.
3. ಟೆಂಡರ್-ಕಂ-ಹರಾಜಿನ ಎಲ್ಲಾ ಹಕ್ಕುಗಳನ್ನು ಈ ಕೆಳಗೆ ಸಹಿ ಮಾಡಿದವರು ಕಾಯ್ದಿರಿಸಿಕೊಂಡಿರುತ್ತಾರೆ. ಈ ಕುರಿತು ಯಾವುದೇ ಕಾರಣ ಕೊಡದೇ ಹರಾಜನ್ನು ರದ್ದುಪಡಿಸುವ ಅಥವಾ ಮುಂದೂಡುವ ಅಧಿಕಾರವನ್ನು ಹೊಂದಿರುತ್ತಾರೆ.
4. ಟೆಂಡರ್-ಕಂ-ಹರಾಜಿನಲ್ಲಿ ಪಡೆದ ವಾಹನದ ಯಶಸ್ವಿ ಟೆಂಡರ್‌ದಾರರೇ ರಿಜಿಸ್ಟ್ರೇಷನ್ ಬದಲಾಯಿಸಿಕೊಳ್ಳಬೇಕು.
5. ಟೆಂಡರ್ ಅಥವಾ ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಪ್ರತಿಯೊಂದು ವಾಹನಕ್ಕೆ ನಿಗದಿಪಡಿಸಿದ ಹಣ ನಗದು ರೂಪದಲ್ಲಿ ಪಾವತಿಸತಕ್ಕದ್ದು.
6. ಬಹಿರಂಗ ಹರಾಜಿನಲ್ಲಿ (ಇ.ಎಂ.ಡಿ) ಹಣವನ್ನು ಜಮಾ ಮಾಡಿ ಹರಾಜಿನ ಷರತ್ತುಗಳಿಗೆ ಒಪ್ಪಿ ಸಹಿ ಮಾಡತಕ್ಕದ್ದು.
7. ನೊಂದಾಯಿತ ಗುತ್ತಿಗೆದಾರರು ಅಲ್ಲದೆ ಇತರರು ಭಾಗವಹಿಸಬೇಕಾದರೆ ಸ್ವಂತ ಗುರುತಿನ ದಾಖಲಾತಿಗಳನ್ನು ಸಲ್ಲಿಸತಕ್ಕದ್ದು.
8. ಟೆಂಡರ್ ಹಾಗೂ ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಬೆಲೆ ಕೊಡುವವರ ಪಕ್ಷದಲ್ಲಿ ಹರಾಜು ಬಿಡಲಾಗುವುದು.

ಅನುಸೂಚಿ

| ಕ್ರ.ಸಂ. | ವಾಹನದ ನೋಂದಣಿ ಸಂಖ್ಯೆ ಮತ್ತು ವಿವರ | ಜಮಾ ಮಾಡಬೇಕಾದ ಇ.ಎಂ.ಡಿ. ಹಣ | ವಾಹನ ಇರುವ ಸ್ಥಳ |
|---|---|---|---|
| 1 | 2 | 3 | 4 |
| 1. | ಟಿವಿಎಸ್ ಮಾಕ್ಸ್-100 ಕೆಎ-39/ಇ-2855 | ರೂ.5,000/- ಮಾತ್ರ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಪ್ರಾದೇಶಿಕ ಅರಣ್ಯ ವಿಭಾಗ, ಬೀದರ್ ಕೌಂಪೌಂಡ್ |
| 2. | ಟಿವಿಎಸ್ ವಿಕ್ಟರ್ ಜಿಎಲ್ ಕೆಎ-39/ಇ-9905 | | |
| 3. | ಹಿರೋ ಹೊಂಡಾ ಕೆಎ-39/ಇ-143 | | |
| 4. | ಹಿರೋ ಹೊಂಡಾ ಕೆಎ-38/ಇ-783 | | |
| 5. | ಹಿರೋ ಹೊಂಡಾ ಎಇಎಸ್-4214 | | |
| 6. | ಸ್ಕೂಟರ್ ಎಪಿ-9/ಇ-3310 | | |
| 7. | ಆಟೋರಿಕ್ಷಾ ಎಪಿ-9/ಟಿ-5093 | | |
| 8. | ಟಿವಿಎಸ್-50-ಎಕ್ಸ್ಎಲ್ ಕೆಎ-39/ಇ-997 | | |
| 9. | ಕವಾಸಾಕಿ ವಿಂಡ್-125 ಕೆಎ-39/ಹೆಚ್-0493 | | |
| 10. | ಮಾರುತಿ ವ್ಯಾನ್ ಓಮ್ನಿ ಜಿಎ-01/ಸಿ-1589 | | |

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಪ್ರಾದೇಶಿಕ ಅರಣ್ಯ ವಿಭಾಗ, ಬೀದರ.

ಪಿ.ಆರ್.512

## ಕರ್ನಾಟಕ ಸರ್ಕಾರ ಸಚಿವಾಲಯ, ವಿಧಾನಸೌಧ, ಬೆಂಗಳೂರು

## ಮರು ಟೆಂಡರ್ ಅಧಿಸೂಚನೆ

## ಸಂಖ್ಯೆ: ಸಿಆಸುಇ 72 ಡಿಸಭೆ 2005 ದಿನಾಂಕ: 9ನೇ ಸೆಪ್ಟೆಂಬರ್ 2005

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ನಡೆಯುವ ಸಭೆ: ಸಮಾರಂಭಗಳು ಮತ್ತು ರಾಜಭವನದಲ್ಲಿ ನಡೆಯುವ ಪ್ರತಿಜ್ಞಾ ಸ್ವೀಕಾರ ಸಮಾರಂಭ ಇತ್ಯಾದಿಗಳಿಗೆ ಧ್ವನಿವರ್ಧಕ ವ್ಯವಸ್ಥೆ, ಧ್ವನಿಮುದ್ರಿತ ಶಾಸ್ತ್ರೀಯ ಸಂಗೀತ ಮತ್ತು ಇತರ ಎಲೆಕ್ಟ್ರಾನಿಕ್ ಉಪಕರಣಗಳನ್ನು ದರ ಗುತ್ತಿಗೆ ಆಧಾರದ ಮೇಲೆ ಬಾಡಿಗೆಗೆ ಪಡೆಯುವ ಬಗ್ಗೆ ದಿನಾಂಕ: 1.11.2005 ರಿಂದ 31.10.2006ರ ಒಂದು ವರ್ಷದ ಅವಧಿಗೆ ನೀಡುವ ಬಗ್ಗೆ ಅನುಭವಸ್ಥ ಹಾಗೂ ಪ್ರಸಿದ್ಧ ಸಂಸ್ಥೆಗಳಿಂದ ಟೆಂಡರನ್ನು ಕರೆಯಲಾಗಿದೆ.

ಈ ಸಂಬಂಧ ಅವಶ್ಯಕ ಉಪಕರಣಗಳ ವಿವರಗಳನ್ನು ಈ ಕೆಳಗೆ ಕೊಡಲಾಗಿದೆ.

| ಕ್ರಮ ಸಂಖ್ಯೆ | ಪಬ್ಲಿಕ್ ಅಡ್ರೆಸ್ ಸಿಸ್ಟಮ್‌ನ ಉಪಕರಣಗಳ ವಿವರ | ದರ ರೂ.ಪೈ. |
|---|---|---|
| 1 | ಕಾಲಂ ಸ್ಪೀಕರ್ 60 ಡಬ್ಲ್ಯೂ 100 ಪಿ (ಇನ್‌ಡೋರ್) | |
| 2 | ಹೆವಿಡ್ಯೂಟಿ ಸ್ಪೀಕರ್ ವಿತ್ ಎಲ್‌ಎಂಯು 12" 200 ಡಬ್ಲ್ಯೂ | |
| 3 | ಸ್ಪೀಕರ್ ಕೇಬಲ್ (ಮಿನಿಮಂ 200 ಫೀಟ್ ಲೆನ್ಸ್) | |
| 4 | 2.5 ಕೆ.ವಿ.ಎ. ಜನರೇಟರ್ per day | |
| 5 | ಟೈಮ್ ಡಿಲೇ: ಎಕೋ ಯುನಿಟ್ | |
| 6 | ಪ್ರಿ-ಆಂಪ್ಲಿ ಫೈಯರ್ 6 ಚಾನಲ್ | |
| 7 | ಪ್ರಿ-ಆಂಪ್ಲಿ ಫೈಯರ್ 12 ಚಾನಲ್ | |
| 8 | ಪವರ್ ಆಂಪ್ಲಿಫೈಯರ್ 100 ವ್ಯಾಟ್ಸ್ | |
| 9 | ಪವರ್ ಆಂಪ್ಲಿಫೈಯರ್ 200 ವ್ಯಾಟ್ಸ್ | |
| 10 | ಪವರ್ ಆಂಪ್ಲಿಫೈಯರ್ 300 ವ್ಯಾಟ್ಸ್ | |
| 11 | ಪವರ್ ಆಂಪ್ಲಿಫೈಯರ್ (ಬೂಸ್ಟರ್) 600 ವ್ಯಾಟ್ಸ್ | |
| 12 | ಕಾಲಂ ಸ್ಟಕ್ಚರ್ 25 ಫೀಟ್ (if required) | |
| 13 | ಬ್ಯಾಟರಿ ಸ್ಟೇಷನ್ 24 ವ್ಯಾಟ್ಸ್ ಡಿ.ಸಿ. per day | |
| 14 | ಹೆವಿ ಡ್ಯೂಟಿ ಔಟ್ ಡೋರ್ ಯೂನಿಟ್ ಫಾರ್ ಹಾರನ್ 40 ವ್ಯಾಟ್ಸ್ | |
| 15 | ಲೈನ್ ಮ್ಯಾಚಿಂಗ್ ಯೂನಿಟ್ | |
| 16 | ರೆಕಾರ್ಡಿಂಗ್: ಪ್ಲೇಬ್ಯಾಕ್ ಡೆಕ್ | |
| 17 | ಟ್ರಂಪ್ಟ್ ಹಾರನ್ ಫಾರ್ ಔಟ್ ಡೋರ್ | |
| 18 | ಫಾರ್ ಸಿ 60 ಕ್ಯಾಸೆಟ್ (ಫಾರ್ ಆಡಿಯೋ ರೆಕಾರ್ಡಿಂಗ್ ಇನ್‌ಕ್ಲೂಡಿಂಗ್ ಲೇಬರ್ ಚಾರ್ಜಸ್) | |
| 19 | ಪವರ್ ಸಪ್ಲೈ ಯೂನಿಟ್, ಎಲ್‌ಬಿಡಿ 8774 | |
| 20 | ಚೇರ್‌ಮನ್ ಯೂನಿಟ್, ಎಲ್‌ಬಿಡಿ 8781 | |
| 21 | ಡೆಲಿಗೇಟ್ ಯೂನಿಟ್ ಎಲ್‌ಬಿಡಿ 8782 | |
| 22 | ಸೆಕ್ರೆಟರಿ ಯೂನಿಟ್ ಎಲ್‌ಬಿಡಿ 8783 | |
| 23 | ಮೈಕ್ ಎಕ್ಸ್‌ಟೆನ್‌ಷನ್ ಯೂನಿಟ್ ಎಲ್‌ಬಿಡಿ 8784 | |

| | | |
|---|---|---|
| 24 | 2.5 ಕೆ.ವಿ.ಎ. ಸ್ಟೆಬಿಲೈಜರ್ | |
| 25 | ಮೈಕ್ ವಿತ್ 25 ಫೀಟ್ ಕೇಬಲ್ ಅಂಡ್ ಎಂಡ್ ಕನೆಕ್ಟರ್ | |
| 26 | ಮಲ್ಟಿಕೋಡ್ ಕೇಬಲ್ ಜಿ. ಬಿ. | |
| 27 | ಎಫ್.ಎಂ. ಮೈಕ್ ವಿತ್ ರಿಸೀವರ್ | |
| 28 | ಹೈಟೆಡ್ ಸ್ಟ್ಯಾಂಡ್ ವಿತ್ 1000 ವ್ಯಾಟ್ಸ್ ಸ್ಪೀಕರ್ | |

**ಟೆಂಡರ್‌ನ ಷರತ್ತು ಮತ್ತು ನಿಬಂಧನೆಗಳು ಈ ಕೆಳಗಿನಂತೆ ಇವೆ**

1. ಮೊಹರಾದ ಟೆಂಡರ್ ಲಕೋಟೆ ಮೇಲೆ "ಧ್ವನಿವರ್ಧಕ ವ್ಯವಸ್ಥೆಯ ಏರ್ಪಾಡು ದರ ಗುತ್ತಿಗೆ" ಎಂದು ಬರೆದಿರತಕ್ಕದ್ದು.
2. ಸಲ್ಲಿಸಿರುವ ಟೆಂಡರ್‌ನೊಂದಿಗೆ ಇ.ಎಂ.ಡಿ. (ಠೇವಣಿ) ಮೊತ್ತ ರೂ.2,500/- (ರೂಪಾಯಿ ಎರಡು ಸಾವಿರದ ಐದು ನೂರು ಮಾತ್ರ)ಕ್ಕೆ ಬ್ಯಾಂಕ್ ಡ್ರಾಫ್ಟ್‌ನ್ನು "ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ)", ಇವರ ಹೆಸರಿಗೆ ಸಲ್ಲಿಸತಕ್ಕದ್ದು.
3. ಇ.ಎಂ.ಡಿ. ಸಂಬಂಧ ಬ್ಯಾಂಕ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
4. ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ: 17.10.2005ರ ಮಧ್ಯಾಹ್ನ 3.00 ಗಂಟೆ. ಟೆಂಡರ್‌ಗಳನ್ನು ಸಿಆಸುಇ (ಕಾರ್ಯಕಾರಿ), ಕೊಠಡಿ ಸಂಖ್ಯೆ: 23, ನೆಲಮಹಡಿ, ವಿದಾನಸೌಧ, ಬೆಂಗಳೂರು, ಇಲ್ಲಿಗೆ ಸಲ್ಲಿಸತಕ್ಕದ್ದು. ನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
5. ಈ ಟೆಂಡರ್‌ಗಳನ್ನು ದಿನಾಂಕ: 17.10.2005ರ ಮಧ್ಯಾಹ್ನ 3.30 ಗಂಟೆಗೆ ಅಧೀನ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ-1), ಕೊಠಡಿ ಸಂಖ್ಯೆ: 23, ವಿಧಾನಸೌಧ ಬೆಂಗಳೂರು, ಇವರ ಕಚೇರಿಯಲ್ಲಿ ತೆರೆಯಲಾಗುವುದು.
6. ನಮೂದಿಸಿರುವ ದರಗಳಲ್ಲಿ ಉಪಕರಣಗಳ ಸಾಗಾಣಿಕೆ ವೆಚ್ಚ ಮತ್ತು ಕಾರ್ಮಿಕ ವೆಚ್ಚವೂ ಸೇರಿರತಕ್ಕದ್ದು.
7. ಉಪಕರಣಗಳನ್ನು 2ನೇ ದಿನ ಅಥವಾ ನಂತರದ ದಿನಗಳಿಗೆ ಉಪಯೋಗಿಸಿದಲ್ಲಿ ಸಂಸ್ಥೆಯು ಬಾಡಿಗೆ ವೆಚ್ಚದಲ್ಲಿ ಶೇ.25 ರಷ್ಟು ರಿಯಾಯಿತಿ ನೀಡತಕ್ಕದ್ದು.
8. ಒಳ್ಳೆಯ ಗುಣಮಟ್ಟದ ಉಪಕರಣಗಳನ್ನೇ ಸಂಸ್ಥೆಯು ಸರಬರಾಜು ಮಾಡತಕ್ಕದ್ದು.
9. ಅವಶ್ಯಕತೆಗನುಸಾರವಾಗಿ ರಜಾ ದಿನಗಳಲ್ಲೂ ಹಾಗೂ ಅತ್ಯಂತ ಕಡಿಮೆ ಕಾಲಾವಕಾಶದಲ್ಲಿ ಸಹ ಧ್ವನಿವರ್ಧಕ ವ್ಯವಸ್ಥೆ ಮತ್ತು ಶಾಸ್ತ್ರೀಯ ಸಂಗೀತ ವ್ಯವಸ್ಥೆಯನ್ನು ಮಾಡಲು ಸಂಸ್ಥೆಯು ಸಿದ್ಧವಿರತಕ್ಕದ್ದು.
10. ದೊಡ್ಡ ಪ್ರಮಾಣದ ಸಭೆ: ಸಮಾರಂಭಗಳಲ್ಲಿ ಧ್ವನಿವರ್ಧಕ ವ್ಯವಸ್ಥೆ ಮಾಡಿ ಅನುಭವವಿರುವ ಸಂಸ್ಥೆಗಳು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸತಕ್ಕದ್ದು.
11. ಉತ್ತಮ ಗುಣಮಟ್ಟದ ಉಪಕರಣಗಳನ್ನು ಉಪಯೋಗಿಸಿಕೊಂಡು ತೃಪ್ತಿಕರವಾಗಿ ಧ್ವನಿವರ್ಧಕ ವ್ಯವಸ್ಥೆಯನ್ನು ಏರ್ಪಾಡು ಮಾಡಲು ವಿಫಲರಾದಲ್ಲಿ, ಅವಧಿಗೆ ಮೊದಲೇ ಗುತ್ತಿಗೆಯನ್ನು ರದ್ದುಗೊಳಿಸಲು ಮತ್ತು ಇ.ಎಂ.ಡಿ. (ಭದ್ರತಾ ಠೇವಣಿ) ಮೊತ್ತವನ್ನು ಮುಟ್ಟುಗೋಲು ಹಾಕುವ ಹಕ್ಕನ್ನು ಸರ್ಕಾರ ಕಾದಿರಿಸಿದೆ.
12. ಯಶಸ್ವಿ ಟೆಂಡರ್‌ದಾರರ ಇ.ಎಂ.ಡಿ. ಹಣವನ್ನು ಭದ್ರತಾ ಠೇವಣಿಯಾಗಿ ಇಟ್ಟುಕೊಳ್ಳಲಾಗುವುದು. ಗುತ್ತಿಗೆ ಅವಧಿ ಮುಗಿದ ಮೇಲೆ ಯಾವುದೇ ಬಾಕಿ/ ದೂರು ಇಲ್ಲದಿದ್ದಲ್ಲಿ, ಈ ಮೊತ್ತವನ್ನು ಬಡ್ಡಿ ರಹಿತವಾಗಿ ಹಿಂದಿರುಗಿಸಲಾಗುವುದು.
13. ಕೇವಲ 4 ಅಥವಾ 5 ಗಂಟೆಯ ಕಾಲಾವಕಾಶದಲ್ಲಿ ಧ್ವನಿವರ್ಧಕ ವ್ಯವಸ್ಥೆಯ ಏರ್ಪಾಡುಗಳನ್ನು ಯಾವುದೇ ಕಾರಣ ನೀಡದೇ ಸಿದ್ಧಗೊಳಿಸಲು ಶಕ್ತರಿರುವ ಸಂಸ್ಥೆಗಳು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸತಕ್ಕದ್ದು.
14. ಗುತ್ತಿಗೆ ಅವಧಿಯು ದಿನಾಂಕ: 1.11.2005 ರಿಂದ ಒಂದು ವರ್ಷದ ಅವಧಿಗೆ ಇರುತ್ತದೆ.
15. ಅಯಶಸ್ವಿ ಟೆಂಡರ್‌ದಾರರ ಬ್ಯಾಂಕ್ ಡ್ರಾಫ್ಟ್‌ನ್ನು ಹಿಂದಿರುಗಿಸಲಾಗುವುದು.
16. ಟೆಂಡರ್‌ನ ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಿದಲ್ಲಿ, ಗುತ್ತಿಗೆಯನ್ನು ರದ್ದುಪಡಿಸಲು ಮತ್ತು ಇ.ಎಂ.ಡಿ. (ಭದ್ರತಾ ಠೇವಣಿ)ಯನ್ನು ಮುಟ್ಟುಗೋಲು ಹಾಕುವ ಹಕ್ಕನ್ನು ಸರ್ಕಾರ ಕಾಯ್ದಿರಿಸಿದೆ.
17. ಯಾವುದೇ ಕಾರಣವನ್ನು ನೀಡದೇ, ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಟೆಂಡರ್ ಸ್ವೀಕರಿಸುವ ಸಮರ್ಥ ಅಧಿಕಾರಿಯವರು ಕಾಯ್ದಿರಿಸಿಕೊಂಡಿದ್ದಾರೆ. ಇವರ ನಿರ್ಣಯವೇ ಅಂತಿಮವಾದದ್ದು.
18. ಯಶಸ್ವಿ ಟೆಂಡರ್‌ದಾರರು ಆದೇಶ ನೀಡಿದ 15 ದಿನಗಳೊಳಗೆ ನಿಗದಿತ ಮೊತ್ತದ ಛಾಪಾ ಕಾಗದದಲ್ಲಿ ಕರಾರು ಪತ್ರವನ್ನು ಸಹಿ ಮಾಡಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಕೆ. ರವಿಮೂರ್ತಿ**

ಪಿ.ಆರ್.514

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಕಾರ್ಯಕಾರಿ-1).

## ಕರ್ನಾಟಕ ಲೋಕಸೇವಾ ಆಯೋಗ

## ಲೋಕಸೇವಾ ಆಯೋಗದ ಕಛೇರಿ "ಪಾರ್ಕ್‌ಹೌಸ್" ಬೆಂಗಳೂರು

## ತಿದ್ದುಪಡಿ ಸಂಖ್ಯೆ: ಇಪ(2)1861:2005-06:ಪಿಎಸ್‌ಸಿ ದಿನಾಂಕ: 12ನೇ ಸೆಪ್ಟೆಂಬರ್ 2005

ಆಯೋಗದ ಅಧಿಸೂಚನೆ ಸಂಖ್ಯೆ: ಇಪ(1)1450:2005-06: ಪಿಎಸ್‌ಸಿ ದಿನಾಂಕ: 16.08.2005ರಲ್ಲಿ ಪ್ರಕಟಿಸಲಾಗಿರುವ 2005ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ಅದರಲ್ಲಿ "ಮಂಡ್ಯ" ಕೇಂದ್ರಕ್ಕೆ ಸಂಬಂಧಿಸಿದಂತೆ ಅಪೆಂಡಿಕ್ಸ್ 'ಎ'ರ ಅಡಿಯಲ್ಲಿ ಪಿಡಬ್ಲ್ಯೂಡಿ. ಲೋಯರ್ ವಿಷಯದ ಶೀರ್ಷಿಕೆಯ ಕೆಳಗೆ ಸಾಮಾನ್ಯ ದರ್ಜೆ ರಡಿಯಲ್ಲಿನ ನೋಂದಣಿ ಸಂಖ್ಯೆಗಳೊಂದಿಗೆ ನೋಂದಣಿ ಸಂಖ್ಯೆ: 46394ನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

ಕಾರ್ಯದರ್ಶಿ, ಹಾಗೂ ಇಲಾಖಾ ಪರೀಕ್ಷೆಗಳ ನಿಯಂತ್ರಕರು,

ಪಿ.ಆರ್.517

ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**ಕಮಾಂಡೆಂಟ್ ರವರ ಕಛೇರಿ, 1ನೇ ಪಡೆ ಕೆ.ಎಸ್.ಆರ್.ಪಿ ನಂ.60, ರಿಚ್ಮಂಡ್ ರಸ್ತೆ, ಬೆಂಗಳೂರು-560 025**
**ಅಧಿಸೂಚನೆ ಸಂಖ್ಯೆ: ಸಿಬ್ಬಂದಿ(1)ನೇಮಕಾತಿ:115:2004-05: ದಿನಾಂಕ: 22ನೇ ಜೂನ್ 2005**
**ಒ.ಬಿ. ಸಂಖ್ಯೆ:31:2005-06**

ಕಮಾಂಡೆಂಟ್, 1ನೇ ಪಡೆ ಕೆಎಸ್ಆರ್‌ಪಿ ಬೆಂಗಳೂರು ರವರ ಅಧಿಸೂಚನೆ ಸಂಖ್ಯೆ: ಸಿಬ್ಬಂದಿ (1) ನೇಮಕಾತಿ 115/2004-05, ದಿನಾಂಕ:1.2.2005, ಮತ್ತು ತಿದ್ದುಪಡಿ ಅಧಿಸೂಚನೆ ಸಮಸಂಖ್ಯೆ ಹಾಗೂ ದಿನಾಂಕ: 01.04.2005ರಲ್ಲಿ ಈ ಕೆಳಕಂಡ 'ಸಿ' ವೃಂದದ ಪೊಲೀಸ್ ಪೇದೆ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದ್ದು, ಈ ಹುದ್ದೆಗಳಿಗೆ ಕರ್ನಾಟಕ ರಾಜ್ಯ ನಾಗರೀಕ ಸೇವಾ (ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿದ ವ್ಯಕ್ತಿಗಳಿಗೆ ಮೀಸಲಿರಿಸಿದ, ತುಂಬದೆ ಇರುವ ಖಾಲಿ ಹುದ್ದೆಗಳು) (ವಿಶೇಷ ನೇಮಕಾತಿ) ನಿಯಮಗಳು 2001ರ ಅಡಿಯಲ್ಲಿ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ಕೆಳಕಂಡಂತೆ ಅಂತಿಮ ಆಯ್ಕೆ ಪಟ್ಟಿಯನ್ನು ಸರ್ಕಾರದ ಆದೇಶ ಸಂಖ್ಯೆ ಡಿಪಿಎಆರ್:13:ಎಸ್‌ಬಿಸಿ:01 ದಿನಾಂಕ: 21.11.2001ರ ಮೇರೆಗೆ ಪ್ರಕಟಿಸಿದೆ. ಈ ಆಯ್ಕೆ ಪಟ್ಟಿಯಲ್ಲಿ ಮುಖ್ಯಪಟ್ಟಿಗೆ ಆಯ್ಕೆಯಾಗಿರುವ ಎಲ್ಲಾ ಅಭ್ಯರ್ಥಿಗಳು ಈ ಅಧಿಸೂಚನೆ ಪ್ರಕಟಿಸಿದ 15 ದಿನಗಳೊಳಗೆ ನೇಮಕಾತಿಗೆ ಸಂಬಂಧಪಟ್ಟ ಎಲ್ಲಾ ಮೂಲ ದಾಖಲಾತಿಗಳೊಂದಿಗೆ ಕಮಾಂಡೆಂಟ್, 1ನೇ ಪಡೆ ಕೆಎಸ್ಆರ್‌ಪಿ ನಂ.60, ರಿಚ್ಮಂಡ್ ರಸ್ತೆ, ಬೆಂಗಳೂರು ರವರ ಬಳಿ ಹಾಜರಾಗಲು ಸೂಚಿಸಲಾಗಿದೆ.

ನೇಮಕಾತಿ ಪ್ರಾಧಿಕಾರಿ: ಕಮಾಂಡೆಂಟ್, 1ನೇ ಪಡೆ, ಕೆಎಸ್ಆರ್‌ಪಿ., ಬೆಂಗಳೂರು

**ಪೊಲೀಸ್ ಪೇದೆಗಳ ಅಂತಿಮ ಆಯ್ಕೆ ಪಟ್ಟಿ:**

1. ಪೊಲೀಸ್ ಪೇದೆ ಹುದ್ದೆಯ ಪರಿಶಿಷ್ಟ ಜಾತಿ ಅಭ್ಯರ್ಥಿಗಳು 29-40 ವಯೋಮಾನದ ಅಭ್ಯರ್ಥಿಗಳ **ಮುಖ್ಯಪಟ್ಟಿ** (29-40 ವರ್ಷಗಳ ವಯೋಮಿತಿಯಲ್ಲಿ)

| ಕ್ರ. ಸಂ. | ರೋಲ್ ನಂಬರ್ | ಅಭ್ಯರ್ಥಿಯ ಹೆಸರು | ಜನ್ಮ ದಿನಾಂಕ | ಗಳಿಸಿದ ಶೇಕಡವಾರು ಅಂಕ | ವರ್ಗೀಕರಣ |
|---|---|---|---|---|---|
| 1 | 2 | 3 | 4 | 5 | 6 |
| 1 | 6162 | ಮುರುಗೇಶ ಟಿ. ಎಸ್., ಕೇರ್ ಆಫ್ ಟಿ. ಚಂದ್ರಪ್ಪ, ಪೊಲೀಸ್ ವಸತಿ ಗೃಹ ಸಂಖ್ಯೆ 98, ಬ್ಲಾಕ್-09, ಭದ್ರಾ ಸಂಕೀರ್ಣ, ಕೋರಮಂಗಲ, ಬೆಂಗಳೂರು-34 | 12.06.66 | 98.50 | ಪರಿಶಿಷ್ಟ ಜಾತಿ |
| 2 | 6173 | ತಿಮ್ಮಪ್ಪ ಸಿ. ಕೇರ್ ಆಫ್ ಯಲ್ಲಪ್ಪ, ಅಂಬೇಡ್ಕರ್ ಕಾಲೋನಿ, ಮನೆ ಸಂ.236 ಕೈಕೊಂಡಹಳ್ಳಿ ಗ್ರಾಮ, ಕಾರ್ಮೆಲರಂ ಅಂಚೆ, ವರ್ತೂರು ಹೋಬಳಿ, ಬೆಂಗಳೂರು ದಕ್ಷಿಣ ತಾ-560035. | 01.12.66 | 94.50 | ಪರಿಶಿಷ್ಟ ಜಾತಿ |
| 3 | 6171 | ರುದ್ರಮೂರ್ತಿ ಹೆಚ್. ಡಿ. ಬಿನ್ ದೊಡ್ಡಬಿಲ್ಲಪ್ಪ, ಹುಲ್ಲೇಹಳ್ಳಿ ಗ್ರಾಮ ಬೀರೂರು ಅಂಚೆ, ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ-577116. | 20.05.67 | 93 | ಪರಿಶಿಷ್ಟ ಜಾತಿ |
| 4 | 6233 | ಮಾರುತಿ ಎಂ. ಸಿ. ಬಿನ್ ಟಿ. ಚನ್ನಪ್ಪ, ಮುಸ್ಟೂರು, ಜಗಳೂರು ತಾ, ದಾವಣಗೆರೆ ಜಿಲ್ಲೆ-577528 | 01.06.71 | 93 | ಪರಿಶಿಷ್ಟ ಜಾತಿ |
| 5 | 6511 | ನಾಗರಾಜ ಎಸ್. ಓಂಟಿಗೋಡಿ, ನಾಗರಾಜ ನಿಲಯ, ಜಯನಗರ, ಮುಧೋಳ್, ಬಾಗಲಕೋಟೆ ಜಿಲ್ಲೆ-587313 | 03.08.75 | 89 | ಪರಿಶಿಷ್ಟ ಜಾತಿ |
| 6 | 6508 | ಗೋಪಾಲ್ ಪವಾರ್, ಕೇರ್ ಆಫ್ ರಮೇಶ್ ಜಾಧವ್ ಶಿಕ್ಷಕರು, ಹನುಮಂತನಗರ, ಬೇಲೂರು ಅಂಚೆ, ಕನಕಪುರ ತಾ, ಬೆಂಗಳೂರು ಗ್ರಾಮಾಂತರ ಜಿಲ್ಲೆ. | 01.06.75 | 77.50 | ಪರಿಶಿಷ್ಟ ಜಾತಿ |
| 7 | 6172 | ರಾಜಶೇಖರಮೂರ್ತಿ, ಬಿನ್ ಹನುಮಂತಪ್ಪ, ಹುಲ್ಲೇನಹಳ್ಳಿ ಗ್ರಾಮ, ಬೀರೂರು ಅಂಚೆ, ಕಡೂರು ತಾ, ಚಿಕ್ಕಮಗಳೂರು ಜಿಲ್ಲೆ-577116. | 24.05.70 | 75.50 | ಪರಿಶಿಷ್ಟ ಜಾತಿ |
| 8 | 6333 | ರಾಮಚಂದ್ರಪ್ಪ ಸಿ. ಬಿನ್ ಚಿಕ್ಕಣ್ಣ, ಶೆಟ್ಟಿಕೊತ್ತನೂರು ಗ್ರಾಮ ಮತ್ತು ಅಂಚೆ, ಕೋಲಾರ ತಾ, ಕೋಲಾರ ಜಿಲ್ಲೆ, | 12.07.72 | 74.50 | ಪರಿಶಿಷ್ಟ ಜಾತಿ |
| 9 | 3425 | ವಸಂತಕುಮಾರ್ ಬಿನ್ ವೆಂಕಟಯ್ಯ, ಚಿಕ್ಕನಹಳ್ಳಿ, ಹೊಳೇನರಸಿಪುರ ತಾ, ಹಾಸನ ಜಿಲ್ಲೆ, | 01.02.72 | 74 | ಪರಿಶಿಷ್ಟ ಜಾತಿ |
| 10 | 6288 | ಮಂಜುನಾಥ್ ಹೆಚ್. ಬಿನ್ ಹುಚ್ಚಯ್ಯ, ಉದ್ದೂರು, ಕೆರೆಗೋಡು ಪೋಸ್ಟ್, ಹಳ್ಳಿ ಮೈಸೂರು ಹೋಬಳಿ, ಹೊಳೆನರಸಿಪುರ ತಾ, ಹಾಸನ ಜಿಲ್ಲೆ. | 20.01.76 | 72.75 | ಪರಿಶಿಷ್ಟ ಜಾತಿ |

2. ಪೊಲೀಸ್ ಪೇದೆ ಹುದ್ದೆಯ ಪರಿಶಿಷ್ಟ ಜಾತಿ ಅಭ್ಯರ್ಥಿಗಳು 29-40 ವಯೋಮಾನದ ಅಭ್ಯರ್ಥಿಗಳ **ಹೆಚ್ಚುವರಿ ಪಟ್ಟಿ** (29-40 ವರ್ಷಗಳ ವಯೋಮಿತಿಯಲ್ಲಿ)

| ಕ್ರ. ಸಂ. | ರೋಲ್ ನಂಬರ್ | ಅಭ್ಯರ್ಥಿಯ ಹೆಸರು | ಜನ್ಮ ದಿನಾಂಕ | ಗಳಿಸಿದ ಶೇಕಡವಾರು ಅಂಕ | ವರ್ಗೀಕರಣ |
|---|---|---|---|---|---|
| 1 | 2 | 3 | 4 | 5 | 6 |
| 1 | 6248 | ಸಿದ್ದರಾಜು ಬಿನ್ ರಾಚಯ್ಯ, ನಂ.1734/1, 6ನೇ ಕ್ರಾಸ್, ಮಗ್ಗದ ಮನೆ ಪಕ್ಕ, ಗಣೇಶ ದೇವಸ್ಥಾನ ಹಿಂಭಾಗ, ವಿನಾಯಕ ನಗರ, ರಾಮನಗರ-571511 | 03.07.69 | 67 | ಪರಿಶಿಷ್ಟ ಜಾತಿ |

| 1 | 2 | 3 | 4 | 5 | 6 |
|---|---|---|---|---|---|
| 2 | 2265 | ಪರಶಿವಮೂರ್ತಿ ಎಂ. ಕೇರ್ ಆಫ್ ನಂಜಯ್ಯ, ಇಡಬ್ಲ್ಯೂಎಸ್. 190 ನ್ಯೂಕಾಂತ್‌ರಾಜ್ ಅರಸು ರಸ್ತೆ, ಕುವೆಂಪು ನಗರ, ಮೈಸೂರು. | 05.07.72 | 66.25 | ಪರಿಶಿಷ್ಟ ಜಾತಿ |
| 3 | 6202 | ರಾಮದಾಸ್ ಸಿ. ಪಿ. ಬಿನ್ ದಾಸಯ್ಯ, ಚಾಮಲಾಪುರ ಗ್ರಾಮ, ಕೀಲಾರ ಅಂಚೆ, ಕರಗೋಡು ಹೋಬಳಿ, ಮಂಡ್ಯ ತಾ ಮತ್ತು ಜಿಲ್ಲೆ. | 20.07.74 | 64.25 | ಪರಿಶಿಷ್ಟ ಜಾತಿ |
| 4 | 6180 | ಶಿವಸ್ವಾಮಿ ಬಿನ್ ಚನ್ನಮಲ್ಲಯ್ಯ, ಜಾಲಹಳ್ಳಿ, ಬೆಂಗಳೂರು-560031 | 08.06.74 | 63.25 | ಪರಿಶಿಷ್ಟ ಜಾತಿ |
| 5 | 6440 | ಮೋಹನ್ ಜಿ. ಮೋಟಣ್ಣನವರ್, ಮು, ಪೊ. ಚಿಕ್ಕೋಡಿ, ಅಂಕಲಿಖೂಟ ಮನೆ ಸಂ.1787, ಚಿಕ್ಕೋಡಿ. | 22.12.75 | 57 | ಪರಿಶಿಷ್ಟ ಜಾತಿ |
| 6 | 6435 | ಸುಭಾಷ್ ಭಜಂತ್ರಿ ಬಿನ್ ಬಸಪ್ಪ ಭಜಂತ್ರಿ, ನಾಗೇಂದ್ರನ ಮಟ್ಟಿ, ಹೊಸಕೇರಿ ಮಠದ ಹತ್ತಿರ, ಹಾವೇರಿ-581110 | 10.11.68 | 56.50 | ಪರಿಶಿಷ್ಟ ಜಾತಿ |
| 7 | 6361 | ಜಯರಾಮ ನಾಯಕ್, ಕೇರ್ ಆಫ್ ಎಸ್. ಕಮಲಾನಾಯ್ಕ ಹೆಚ್.ಸಿ. (ವೈ), ಪೊಲೀಸ್ ಕಂಟ್ರೋಲ್ ರೂಂ, ಎಸ್.ಪಿ. ಆಫೀಸ್, ಚಿತ್ರದುರ್ಗ-577501. | 04.09.68 | 53 | ಪರಿಶಿಷ್ಟ ಜಾತಿ |
| 8 | 6593 | ಶರಣಪ್ಪ, ತಂದೆ ನಾಗಪ್ಪ, ಮು, ಹೂವಿನಬಾವಿ, ಪಸ್ತಪೂರ ಪೋಸ್ಟ್, ಚಿಂಚೋಳಿ ತಾ, ಗುಲ್ಬರ್ಗಾ ಜಿಲ್ಲೆ-585324 | 10.09.67 | 52.50 | ಪರಿಶಿಷ್ಟ ಜಾತಿ |
| 9 | 6257 | ಮುನಿಸ್ವಾಮಿ ವಿ. ಬಿನ್ ಮುನಿವೆಂಕಟಪ್ಪ, ವರದಾಪುರ ಗ್ರಾಮ, ಮಾಗೊಂದಿ ಅಂಚೆ, ಬಂಗಾರಪೇಟೆ ತಾ, ಕೋಲಾರ ಜಿಲ್ಲೆ. | 21.07.67 | 48.50 | ಪರಿಶಿಷ್ಟ ಜಾತಿ |
| 10 | 4635 | ರಮೇಶ್ ಆರ್, ಬಿನ್ ಆರ್. ರಾಜು, ನಂ.6, 4ನೇ ಕ್ರಾಸ್, ಕಮಲಾ ನೆಹರು ನಗರ (ಜೆ.ಜೆ.ಆರ್.ನಗರ) ಬೆಂಗಳೂರು-560018. | 14.06.75 | 46.75 | ಪರಿಶಿಷ್ಟ ಜಾತಿ |

**ಪೊಲೀಸ್ ಪೇದೆಗಳ ಅಂತಿಮ ಆಯ್ಕೆಪಟ್ಟಿ:**

1. ಪೊಲೀಸ್ ಪೇದೆ ಹುದ್ದೆಯ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳ 29-40 ವಯೋಮಾನದ ಅಭ್ಯರ್ಥಿಗಳ **ಮುಖ್ಯಪಟ್ಟಿ** (29-40 ವರ್ಷಗಳ ವಯೋಮಿತಿಯಲ್ಲಿ)

| ಕ್ರ. ಸಂ. | ರೋಲ್ ನಂಬರ್ | ಅಭ್ಯರ್ಥಿಯ ಹೆಸರು | ಜನ್ಮ ದಿನಾಂಕ | ಗಳಿಸಿದ ಶೇಕಡವಾರು ಅಂಕ | ವರ್ಗೀಕರಣ |
|---|---|---|---|---|---|
| 1 | 2 | 3 | 4 | 5 | 6 |
| 1 | 6358 | ಮೋಹನ್ ಎಂ. ಗಂಗೋಟಿ, ಬಿನ್ ಮಲ್ಲಪ್ಪ ರುದ್ರಪ್ಪ ಗಂಗೋಟಿ, ಹಗೇದಾಳ್ ಗ್ರಾಮ, ಬಸಾಪುರ ಅಂಚೆ, ಹುಕ್ಕೇರಿ ತಾ, ಬೆಳಗಾಂ ಜಿಲ್ಲೆ-591122. | 01.08.70 | 90.50 | ಪರಿಶಿಷ್ಟ ಪಂಗಡ |
| 2 | 6255 | ಯೋಗಾನಂದ ಬಿನ್ ಬಿ. ಮಾರಪ್ಪ, ಪರಮದೇವನಹಳ್ಳಿ ಗ್ರಾಮ ಮತ್ತು ಅಂಚೆ, ಬಳ್ಳಾರಿ ತಾ ಮತ್ತು ಜಿಲ್ಲೆ-583138 | 08.06.75 | 84.50 | ಪರಿಶಿಷ್ಟ ಪಂಗಡ |

2. ಪೊಲೀಸ್ ಪೇದೆ ಹುದ್ದೆಯ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳ 29-40 ವಯೋಮಾನದ ಅಭ್ಯರ್ಥಿಗಳ **ಹೆಚ್ಚುವರಿ ಪಟ್ಟಿ** (29-40 ವರ್ಷಗಳ ವಯೋಮಿತಿಯಲ್ಲಿ)

| ಕ್ರ. ಸಂ. | ರೋಲ್ ನಂಬರ್ | ಅಭ್ಯರ್ಥಿಯ ಹೆಸರು | ಜನ್ಮ ದಿನಾಂಕ | ಗಳಿಸಿದ ಶೇಕಡವಾರು ಅಂಕ | ವರ್ಗೀಕರಣ |
|---|---|---|---|---|---|
| 1 | 6379 | ಗೋಪಾಲ್ ನಾಯಕ್, ಬಿನ್ ಗಿರಿಜ, ಸೋಣೆ ಸಿದ್ದಾಪುರ ಗ್ರಾಮ ಮತ್ತು ಪೋಸ್ಟ್, ಕುಂದಾಪುರ ತಾ, ಉಡುಪಿ ಜಿಲ್ಲೆ. | 11.04.70 | 70 | ಪರಿಶಿಷ್ಟ ಪಂಗಡ |

3. ಪೊಲೀಸ್ ಪೇದೆ ಹುದ್ದೆಯ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳ 18-28 ವಯೋಮಾನದ ಅಭ್ಯರ್ಥಿಗಳ **ಹೆಚ್ಚುವರಿ ಪಟ್ಟಿ** (18-28 ವರ್ಷಗಳ ವಯೋಮಿತಿಯಲ್ಲಿ)

| ಕ್ರ. ಸಂ. | ರೋಲ್ ನಂಬರ್ | ಅಭ್ಯರ್ಥಿಯ ಹೆಸರು | ಜನ್ಮ ದಿನಾಂಕ | ಗಳಿಸಿದ ಶೇಕಡವಾರು ಅಂಕ | ವರ್ಗೀಕರಣ |
|---|---|---|---|---|---|
| 1 | 994 | ಜಗದೀಶ್ ಆರ್. ರಾಮಣ್ಣನವರ್, ನೇತಾಜಿನಗರ, ಇಜಾರಿ ಲಕಮಾಪುರ, ಹಾವೇರಿ-581110. | 20.04.79 | 96.75 | ಪರಿಶಿಷ್ಟ ಪಂಗಡ |

ಈ ಅಂತಿಮ ಆಯ್ಕೆ ಪಟ್ಟಿ ಸಂಬಂಧಪಟ್ಟ ಮೂಲ ದಾಖಲಾತಿಗಳ ಪರಿಶೀಲನೆಗೆ ಒಳಪಟ್ಟಿರುತ್ತದೆ. ಮತ್ತು ಯಾವುದೇ ವ್ಯತ್ಯಾಸ ಕಂಡುಬಂದಲ್ಲಿ ಅಂತಹ ಅಭ್ಯರ್ಥಿ ಆಯ್ಕೆಯ ಅರ್ಹತೆ ಕಳೆದುಕೊಳ್ಳುತ್ತಾರೆ.

**ಬಿ. ಶ್ರೀಕಂಠಪ್ಪ, ಐಪಿಎಸ್.,**

ಪಿ.ಆರ್.518 ಕಮಾಂಡೆಂಟ್, 1ನೇ ಪಡೆ, ಕೆಎಸ್‌ಆರ್‌ಪಿ, ಬೆಂಗಳೂರು-560025.

## ಪಶುಪಾಲನಾ ಮತ್ತು ಪಶುವೈದ್ಯಸೇವಾ ಇಲಾಖೆ

## ಉಪ ನಿರ್ದೇಶಕರ ಕಛೇರಿ, ಜಾನುವಾರು ಸಂವರ್ಧನಾ ಕ್ಷೇತ್ರ, ಹೆಸರಘಟ್ಟ, ಬೆಂಗಳೂರು-89

## ತೆಂಗಿನ ಮರಗಳ ಫಸಲಿನ ಬಹಿರಂಗ ಹರಾಜು ಇಸ್ತಿಹಾರ್

### ಸಂಖ್ಯೆ: ಉನಿ:ಜಾಸಂಕ್ಷೇ:ಸಿ3:ಅಮಫ:ಹರಾಜು:2005-06/318 ದಿನಾಂಕ: 12ನೇ ಸೆಪ್ಟೆಂಬರ್ 2005

ಈ ಮೂಲಕ ಸಾರ್ವಜನಿಕರ ಗಮನಕ್ಕೆ ತರುವುದೇನೆಂದರೆ ಈ ಕ್ಷೇತ್ರಕ್ಕೆ ಸೇರಿದ 296 ಮರಗಳ ತೆಂಗಿನ ಫಸಲನ್ನು ದಿನಾಂಕ: 26.10.2005ರ ಬುಧವಾರದಂದು ಬೆಳಿಗ್ಗೆ 11.00 ಗಂಟೆಗೆ ಜಾನುವಾರು ಸಂವರ್ಧನಾ ಕ್ಷೇತ್ರ, ಹೆಸರಘಟ್ಟ, ಬೆಂಗಳೂರು-89 ರಲ್ಲಿನ ಕಛೇರಿ ಆವರಣದಲ್ಲಿ ಬಹಿರಂಗ ಹರಾಜು ಮಾಡಲಾಗುವುದು.

**ನಿಬಂಧನೆಗಳು:**

1. ಹರಾಜಿನಲ್ಲಿ ಭಾಗವಹಿಸುವವರು ಹರಾಜಿಗೆ ಮೊದಲು ರೂಪಾಯಿ 2000.00 (ರೂಪಾಯಿ ಎರಡು ಸಾವಿರ ಮಾತ್ರ) ಗಳನ್ನು ಠೇವಣಿ ಹಣವನ್ನು ನಗದು ರೂಪದಲ್ಲಿ ಸಂದಾಯ ಮಾಡಿ ಹರಾಜಿನಲ್ಲಿ ಭಾಗವಹಿಸತಕ್ಕದ್ದು. ಈ ಹಣವನ್ನು ಹೆಚ್ಚು ಬಿಡ್ಡು ಮಾಡಿದವರನ್ನು ಹೊರತುಪಡಿಸಿ ಹರಾಜು ಮುಗಿದ ನಂತರ ಹಿಂತಿರುಗಿಸಲಾಗುವುದು.
2. ಯಶಸ್ವಿ ಹರಾಜುದಾರರು ಪೂರ್ಣ ಮೊಬಲಗನ್ನು ಮತ್ತು ಸಂಬಂಧಪಟ್ಟ ಇತರೆ ತೆರಿಗೆಗಳ ಸಹಿತ ತಕ್ಷಣವೇ ಪಾವತಿ ಮಾಡಿ ರಸೀದಿ ಪಡೆಯತಕ್ಕದ್ದು. ತಪ್ಪಿದ್ದಲ್ಲಿ ಠೇವಣಿಯನ್ನು ದಂಡವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೇ ಪುನಃ ಹರಾಜು ಮಾಡಲಾಗುವುದು. ಆದರಿಂದ ಆದ ನಷ್ಟದ ಮೊಬಲಗನ್ನು ಮೊದಲನೇ ಯಶಸ್ವಿ ಹರಾಜುದಾರರಿಂದಲೇ ರೆವಿನ್ಯೂ ಬಾಕಿಯೆಂದು ಪರಿಗಣಿಸಿ ವಸೂಲಿ ಮಾಡಲಾಗುವುದು. ಲಾಭವೇನಾದರೂ ಬಂದಲ್ಲಿ ಅದಕ್ಕೆ ಅವರು ಅರ್ಹರಾಗಿರುವುದಿಲ್ಲ.
3. ಹರಾಜಿನಲ್ಲಿ ಕೊಂಡ ಫಸಲನ್ನು ಎಲ್ಲಾ ವಿಧದಲ್ಲಿಯೂ ಕಾಪಾಡಿಕೊಳ್ಳುವ ಜವಾಬ್ದಾರಿಯು ಫಸಲನ್ನು ಕೊಂಡವರಿಗೆ ಸೇರಿರುತ್ತದೆ. ಈ ಬಗ್ಗೆ ಯಾವ ವಿಧವಾದ ದೂರುಗಳನ್ನು ಸ್ವೀಕರಿಸಲಾಗುವುದಿಲ್ಲ.
4. ಸರ್ಕಾರದ ಸ್ವತ್ತಿಗೆ ಯಾವ ವಿಧವಾದ ನಷ್ಟಗಳೇನಾದರೂ ಆದರೆ ಹರಾಜುದಾರನ ಸ್ವಂತ ಖರ್ಚಿನಿಂದ ಸರಿಪಡಿಸಬೇಕು.
5. ಹರಾಜನ್ನು ಯಾವ ಕಾರಣವನ್ನು ನೀಡದೇ ಯಾವ ಸಂದರ್ಭದಲ್ಲಾದರೂ ರದ್ದು ಮಾಡುವ ಅಧಿಕಾರ ಹರಾಜು ನಡೆಸುವ ಅಧಿಕಾರಿಗಳಿಗೆ ಸೇರಿರುತ್ತದೆ.
6. ಹರಾಜನ್ನು ಈ ಇಲಾಖೆಯ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯಸೇವಾ ಇಲಾಖೆ, ಕರ್ನಾಟಕ, ಬೆಂಗಳೂರು-1 ಇವರಿಂದ ಅಥವಾ ಇವರಿಂದ ನೇಮಿಸಲ್ಪಟ್ಟವರಿಂದ ನಡೆಸಲಾಗುವುದು. ಹರಾಜಿನ ಯಾವ ಅಂತಿಮ ನಿರ್ಧಾರವು ಹರಾಜು ನಡೆಸುವ ಅಧಿಕಾರಿಗಳಿಗೆ ಸೇರಿರುತ್ತದೆ.
7. ಹರಾಜಿನಲ್ಲಿ ಕೊಂಡ ಫಸಲನ್ನು ಹರಾಜು ನಡೆದ ದಿನಾಂಕ ಅಂದರೆ 26.10.2005 ರಿಂದ 31.08.2006 ರವರೆಗೆ ಮಾತ್ರ ಅನುಭವಿಸುವುದಕ್ಕೆ ಅರ್ಹರಾಗಿರುತ್ತಾರೆ.
8. ಅತೀ ಹೆಚ್ಚಿನ ಮಾಹಿತಿಗಾಗಿ ಉಪ ನಿರ್ದೇಶಕರು, ಜಾನುವಾರು ಸಂವರ್ಧನಾ ಕ್ಷೇತ್ರ, ಹೆಸರಘಟ್ಟ, ಬೆಂಗಳೂರು-89 ಇವರ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.
9. ಹರಾಜಿನಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಿ ನೌಕರರು ಭಾಗವಹಿಸುವಂತಿಲ್ಲ.

**ಡಾ: ವಿ. ಎಸ್. ರಂಗಸ್ವಾಮಿ**

ಪಿ.ಆರ್.516 ಉಪ ನಿರ್ದೇಶಕರು, ಜಾನುವಾರು ಸಂವರ್ಧನಾ ಕ್ಷೇತ್ರ, ಹೆಸರಘಟ್ಟ, ಬೆಂಗಳೂರು-89.

## ಜಿಲ್ಲಾ ಪೊಲೀಸ್ ಅಧೀಕ್ಷಕರವರ ಕಛೇರಿ, ಬಿಜಾಪುರ

## ಟೆಂಡರ್-ಕಂ-ಹರಾಜು ಅಧಿಸೂಚನೆ

### ಸಂಖ್ಯೆ: ಎಂಟಿ:ನಿರುಪಯುಕ್ತ:50/02-03 ದಿನಾಂಕ: 19ನೇ ಆಗಸ್ಟ್ 2005

**ವಿಷಯ :** ಬಿಜಾಪುರ ಜಿಲ್ಲೆಯ ಪೊಲೀಸ್ ಇಲಾಖೆಯ ನಿರುಪಯುಕ್ತ ವಾಹನಗಳನ್ನು ಟೆಂಡರ್-ಕಂ-ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ :**
1. ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ:03:ಎಎಂವಿ:2004, ಬೆಂಗಳೂರು ದಿನಾಂಕ: 12.05.2005.
2. ಮಾನ್ಯ ಡಿಜಿ ಮತ್ತು ಐಜಿಪಿ, ಕರ್ನಾಟಕ ರಾಜ್ಯ, ಬೆಂಗಳೂರು ರವರ ಹಿಂಬರಹ ಸಂಖ್ಯೆ: ವಾಸಾ(1)58/2002-03, ದಿನಾಂಕ: 09.06.2005.
3. ಈ ಕಛೇರಿ ಅಧಿಸೂಚನೆ ಸಮ ಸಂಖ್ಯೆ: ದಿನಾಂಕ: 04.07.2005.

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖಿತ 3 ರ ಈ ಕಛೇರಿ ಅಧಿಸೂಚನೆಯಲ್ಲಿ ಬಿಜಾಪುರ ಜಿಲ್ಲೆಯ 14 ನಿರುಪಯುಕ್ತ ಪೊಲೀಸ್ ವಾಹನಗಳನ್ನು ದಿನಾಂಕ: 29.08.2005 ರಂದು ಬೆಳಿಗ್ಗೆ 11.00 ಗಂಟೆಗೆ ಜಿಲ್ಲಾ ಸಶಸ್ತ್ರ ಮೀಸಲು ಪಡೆ (ಪೊಲೀಸ್ ಮೋಟಾರು ವಾಹನ ವಿಭಾಗ), ಬಿಜಾಪುರದ ಆವರಣದಲ್ಲಿ ಟೆಂಡರ್-ಕಂ-ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದೆಂದು ತಿಳಿಸಲಾಗಿತ್ತು.

ಆದರೆ ಸದರಿ ದಿನಾಂಕದಂದು ಎ.ಪಿ.ಎಂ.ಸಿ. ಚುನಾವಣೆಯ ಮತ ಎಣಿಕೆ ಇರುವುದರಿಂದ ಬಹಿರಂಗ ಹರಾಜಿನ ದಿನಾಂಕವನ್ನು ಬದಲಾಯಿಸಿ ದಿನಾಂಕ: 24.10.05 ರಂದು ಬೆಳಿಗ್ಗೆ 11.00 ಗಂಟೆಗೆ ನಿಗದಿಪಡಿಸಿದೆ. ಇಚ್ಛೆಯುಳ್ಳ ಸಾರ್ವಜನಿಕರು ಸದರಿ ಟೆಂಡರ್-ಕಂ-ಬಹಿರಂಗ ಹರಾಜಿನಲ್ಲಿ ಭಾಗವಹಿಸಿ ನಿರುಪಯುಕ್ತಗೊಳಿಸಿದ ವಾಹನಗಳನ್ನು ಖರೀದಿಸಬಹುದಾಗಿರುತ್ತದೆ.

ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ದಿನಾಂಕ: 17.10.2005 ರಂದು ಸಾಯಂಕಾಲ 5.00 ಘಂಟೆಯೊಳಗಾಗಿ ಈ ಕಛೇರಿಗೆ ತಲುಪುವಂತೆ ಸಲ್ಲಿಸಲು ಸೂಚಿಸಲಾಗಿದೆ. ಟೆಂಡರ್-ಕಂ-ಬಹಿರಂಗ ಹರಾಜನ್ನು ಈ ಕಛೇರಿ ಅಧಿಸೂಚನೆ ದಿನಾಂಕ: 04.07.05 ರಲ್ಲಿ ತಿಳಿಸಿದಂತೆ ನಿಬಂಧನೆ ಮತ್ತು ಷರತ್ತುಗೊಳಪಟ್ಟು ನಡೆಸಲಾಗುವುದು.

ಪಿ.ಆರ್.520 ಪೊಲೀಸ್ ಅಧೀಕ್ಷಕರು, ಬಿಜಾಪುರ.

